ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ: 14ನೇ ಡಿಸೆಂಬರ್, 2020

ಅತಿಥಿ ಶಿಕ್ಷಕ/ಅತಿಥಿ ಉಪನ್ಯಾಸಕರಿಗೆ ಗೌರವ ಧನ ನೀಡುವ ಬಗ್ಗೆ

ಶ್ರೀ ಅರಣ ಶಹಾಪುರ (ಶಿಕ್ಷಕರ ಕ್ಷೇತ್ರ):-

513(674) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದಲ್ಲಿನ ಪ್ರಾಥಮಿಕ ಶಾಲಾ ಪ್ರೌಢ ಶಾಲೆ ಹಾಗೂ ಪದವಿ ಪೂರ್ವ ಕಾಲೇಜುಗಳಲ್ಲಿ ಅತಿಥಿ ಉಪನ್ಯಾಸಕರಾಗಿ ಕಾರ್ಯ ನಿರ್ವಹಿಸುತ್ತಿರುವವರ ಸಂಖ್ಯೆ ಎಷ್ಟು ; (ಅತಿಥಿ ಶಿಕ್ಷಕರ ಹಾಗೂ ಅತಿಥಿ ಉಪನ್ಯಾಸಕರ ಹೆಸರು ಸಹಿತ ವಿವರ ನೀಡುವುದು)

(ಆ) ಈ ಅತಿಥಿ ಶಿಕ್ಷಕರಿಗೆ, ಅತಿಥಿ ಉಪನ್ಯಾಸಕರಿಗೆ ಪ್ರತಿ ತಿಂಗಳಿಗೆ ನಿಗದಿ ಪಡಿಸಿರುವ ವೇತನ/ಗೌರವ ಧನ ಎಷ್ಟು; ಈ ಹಿಂದೆ ಎಲ್ಲಿಯವರೆಗೆ ಇವರಿಗೆ ಗೌರವ ಧನ ನೀಡಲಾಗಿದೆ ; (ಬಾಕಿ ಉಳಿದಿರುವ ತಿಂಗಳುಗಳ ಮಾಹಿತಿ ನೀಡುವುದು)

(ಇ) ಕೋವಿಡ್-19ರ ಲಾಕ್‌ಡೌನ್ ಅವಧಿಗೆ ಗೌರವ ಧನ ನೀಡಲು ಇರುವ ಸಮಸ್ಯೆ ಏನು; ಗೌರವ ಧನವನ್ನು ನೀಡಿದಲ್ಲಿ ಎಷ್ಟು ಅನುದಾನದ ಅವಶ್ಯಕತೆ ಇದೆ ;

(ಈ) ಈಗಾಗಲೇ ಉನ್ನತ ಶಿಕ್ಷಣ ಇಲಾಖೆಯಲ್ಲಿ ಪದವಿ ಕಾಲೇಜುಗಳ ಅತಿಥಿ ಉಪನ್ಯಾಸಕರಿಗೆ ಲಾಕ್‌ಡೌನ್ ಅವಧಿಯ ಗೌರವ ಧನವನ್ನು ನೀಡದಿರುವಂತೆ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯಡಿ ಕಾರ್ಯ ನಿರ್ವಹಿಸುವ ಅತಿಥಿ ಶಿಕ್ಷಕರಿಗೆ ಗೌರವ ಧನವನ್ನು ನೀಡುವ ಬಗ್ಗೆ ಸರ್ಕಾರ ಕ್ರಮ ಕೈಗೊಳ್ಳುವುದೇ; ಹಾಗಿದ್ದಲ್ಲಿ, ಯಾವ ಕಾಲಮಿತಿಯೊಳಗೆ ನೀಡಲಾಗುವುದು?